RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಅಕ್ಟೋಬರ್ ೧೭, ೨೦೧೩ (ಆಶ್ವಯುಜ ೨೫, ಶಕ ವರ್ಷ ೧೯೩೫)<br>Bangalore, Thursday, October 17, 2013 (Aashwayuja 25, Shaka Varsha 1935) | ಸಂಚಿಕೆ ೪೧<br>Issue 41 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯಃ** ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಖಾಲಿಯಿರುವ ಹುದ್ದೆಗಳಲ್ಲಿ ಶೇ.80 ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆಃ**

1. ಸಿ.ಆ.ಸು ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ–2/ಇಕಾಅ/ 2004, ದಿ.01.03.2004 ಮತ್ತು ದಿ:27.07.2004ರ ಅಧಿಕಾರಯುಕ್ತ ಸಭಾ ನಡವಳಿ ಸಂಖ್ಯೆ: ಸಿಆಸುಇ 21 ಈಕಾಅ 2000.
2. ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ.ಮಾತಂನಿ/ಆಡಳಿತ–1/ ಹುರ/818/2004–05, ದಿ:11.01.2008.
3. ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ.ಆಇ.231.ವೆಚ್ಚ–1/2008, ದಿನಾಂಕ.17.06.2008.
4. ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ.ಮಾತಂನಿ/ಆ–1/ಹುರ/2004–05, ದಿ.30.07.2009.
5. ಸಿ.ಆ.ಸು ಇಲಾಖೆಯ ಸುತ್ತೋಲೆ ಸಂಖ್ಯೆ.ಸಿಆಸುಇ/137/ಈಕಾಅ/ 2005, ದಿನಾಂಕ.26.07.2008 ಮತ್ತು ಅ.ಟಿ.ಸಂಖ್ಯೆ.ಸಿಆಸುಇ 20 ಈಕಾಅ 2006, ದಿನಾಂಕ.8.10.2007 ಹಾಗೂ ಅ.ಟಿ. ಸಂಖ್ಯೆ:ಸಿಆಸುಇ 11 ಆಕಾಅ 2009 ದಿ:01.12.2009.
6. ಮಾತಂ, ಜೈತಂ ನಿರ್ದೇಶಕರ ಪತ್ರ ಸಂಖ್ಯೆ:ಮಾತಂ&ಜೈತಂನಿ/ಆ–1/ತಾಸಿಮ/2010–11 ದಿ:15.06.2013 ಹಾಗೂ ದಿ:23.07.2013.

**ಪ್ರಸ್ತಾವನೆಃ**

ಮೇಲೆ (1)ರಲ್ಲಿ ಓದಲಾದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ದಿನಾಂಕ.01.03.2004ರಲ್ಲಿ 2000–2001ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಯವರು ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿಯಿರುವ ಹುದ್ದೆಗಳಲ್ಲಿ ಶೇ.20ರಷ್ಟು ಹುದ್ದೆಗಳನ್ನು ಉಳಿಸಿಕೊಂಡು ಶೇ.80%ರಷ್ಟು ಹುದ್ದೆಗಳನ್ನು ರದ್ದುಪಡಿಸಲು ಸಲಹೆ ಮಾಡಲಾಗಿರುತ್ತದೆ. ನಂತರ ದಿ:27.07.2004ರಂದು ನಡೆದ ಅಧಿಕಾರಯುಕ್ತ ಸಭೆಯಲ್ಲಿ ದಿ:01.04.2000ದಂದು ಖಾಲಿಯಿರುವ ಹುದ್ದೆಗಳಲ್ಲಿ ಶೇ.20%ರಷ್ಟು ಹುದ್ದೆಗಳನ್ನು ಉಳಿಸಿಕೊಂಡು ಶೇ.80%ರಷ್ಟು ಹುದ್ದೆಗಳನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಿದ್ಧಪಡಿಸಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಆದೇಶ ಮಾಡಲು ತೀರ್ಮಾನಿಸಲಾಗಿದೆ.

ಮೇಲೆ ಓದಲಾದ [2] ರಲ್ಲಿ ಮಾತಂ, ಜೈತಂ ನಿರ್ದೇಶನಾಲಯದಲ್ಲಿ ಖಾಲಿಯಿರುವ ಹುದ್ದೆಗಳು ಹಾಗೂ ಅವುಗಳಲ್ಲಿ ಶೇ.80 ರಷ್ಟು ಹುದ್ದೆಗಳನ್ನು ರದ್ದು ಮಾಡುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ [3] ರಲ್ಲಿ ಆರ್ಥಿಕ ಇಲಾಖೆಯು ಮಾತಂ, ಜೈತಂ ನಿರ್ದೇಶನಾಲಯದಲ್ಲಿ ಖಾಲಿಯಿರುವ ಹುದ್ದೆಗಳಲ್ಲಿ ಶೇ.80 ರಷ್ಟು ವಿವಿಧ ದರ್ಜೆಯ ಈ ಕೆಳಕಂಡ 68 ಹುದ್ದೆಗಳನ್ನು ರದ್ದು ಪಡಿಸುವ ಬಗ್ಗೆ ಸಹಮತಿ ನೀಡಿರುತ್ತದೆ.

| ಕ್ರಮ ಸಂಖ್ಯೆ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1. | ಸಿಸ್ಟಮ್ ಅನಾಲಿಸ್ಟ್ | 08 |
| 2. | ಸೀನಿಯರ್ ಪ್ರೋಗ್ರಾಮರ್ | 02 |
| 3. | ಜೂನಿಯರ್ ಪ್ರೋಗ್ರಾಮರ್ | 37 |
| 4. | ಜೂನಿಯರ್ ಕನ್ಸೋಲ್ ಆಪರೇಟರ್ / ಪ್ರೋಗ್ರಾಮಿಂಗ್ ಅಸಿಸ್ಟೆಂಟ್ / ಸೂಪರ್ ವೈಸರ್ | 03 |

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 5. | ಡಾಟಾ ಎಂಟ್ರಿ ಆಪರೇಟರ್ಸ್ | 14 |
| 6. | ವಿದ್ಯುತ್ ಚಾಲಕರು | 01 |
| 7. | ವಾಹನ ಚಾಲಕರು | 01 |
| 8. | ಶೀಘ್ರಲಿಪಿಗಾರರು | 01 |
| 9. | ದಲಾಯತ್ | 01 |
| | **ಒಟ್ಟು** | **68** |

ಮೇಲೆ ಓದಲಾದ [4] ರಲ್ಲಿನ ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ, ಇವರ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಖಾಲಿಯಿರುವ ಹುದ್ದೆಗಳಲ್ಲಿ ಶೇ.80 ರಷ್ಟು ಹುದ್ದೆಗಳನ್ನು ರದ್ದುಪಡಿಸಿದಲ್ಲಿ ಇಲಾಖೆಯಲ್ಲಿ ಉಂಟಾಗುವ ಪರಿಣಾಮಗಳ ಬಗ್ಗೆ ವಿವರವಾದ ವರದಿಯನ್ನು ಸಲ್ಲಿಸುತ್ತಾ ಶೇ.80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಪಡಿಸಿದಲ್ಲಿ ಇಲಾಖಾ ಕೆಲಸ ಕಾರ್ಯಗಳಲ್ಲಿ ಅಡಚಣೆಯಾಗಲಿದ್ದು, ಶೇ.80 ರಷ್ಟು ಖಾಲಿಯಿರುವ ಹುದ್ದೆಗಳ ಕಡಿತದಿಂದ ನಿರ್ದೇಶನಾಲಯವನ್ನು ಹೊರತುಪಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆದರೆ ಈ ಪ್ರಸ್ತಾವನೆಯ ಬಗ್ಗೆ ಆರ್ಥಿಕ ಇಲಾಖೆಯು ಬೆಂಬಲ ನೀಡಲು ಕಷ್ಟ ಸಾಧ್ಯವೆಂದು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ:ಆಇ 255 ವೆಚ್ಚ.2/2009 ದಿ:01.10.2009ರಲ್ಲಿ ತಿಳಿಸಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ [5] ರಲ್ಲಿನ ಸುತ್ತೋಲೆ ದಿನಾಂಕ.26.07.2008 ಮತ್ತು ಅನಧಿಕೃತ ಟಿಪ್ಪಣಿ ದಿನಾಂಕ.8.10.2007 ರಲ್ಲಿ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾದ ಅಧಿಕಾರಯುಕ್ತ ಸಮಿತಿಯ ನಡವಳಿಗಳಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ವಿವಿಧ ವೃಂದಗಳಲ್ಲಿ ದಿನಾಂಕ.01.04.2000 ರಂದು ಖಾಲಿಯಿರುವ ಹುದ್ದೆಗಳಲ್ಲಿ ಉಳಿಸಿಕೊಳ್ಳುವ ಹಾಗೂ ರದ್ದುಪಡಿಸುವ ಕುರಿತು ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳಲಾಗಿದೆ. ಹಾಗೂ ನಂತರ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯನ್ವಯ ಖಾಲಿಯಿರುವ ಹುದ್ದೆಗಳಲ್ಲಿ ಶೇ.80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಪಡಿಸಲು ನೇಮಿಸಲಾದ ಅಧಿಕಾರಯುಕ್ತ ಸಮಿತಿಯ ಮುಂದೆ ಮಂಡಿಸಲಾಯಿತು. ಹಾಗೂ ಸಿಆಸುಇ ಅಧೀನ ಕಾರ್ಯದರ್ಶಿ, (ಕಾರ್ಯಾಧ್ಯಯನ) ಶಾಖೆಯ ಅ.ಟಿ. ಸಂಖ್ಯೆ:ಸಿಆಸುಇ 11 ಆಖಅ 2009ದಿ:01.09.2009ರಲ್ಲಿ ಖಾಲಿ ಹುದ್ದೆಗಳಲ್ಲಿ ಶೇ.80 ರಷ್ಟು ಹುದ್ದೆಗಳನ್ನು ರದ್ದುಪಡಿಸಲು ಕೋರಲಾಗಿದೆ.

ಮೇಲೆ ಓದಲಾದ (6)ರಲ್ಲಿ ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ ರವರು ಅಧಿಕಾರಯುಕ್ತ ಸಭೆ ಕರೆದು ಖಾಲಿಯಿರುವ ಹುದ್ದೆಗಳಲ್ಲಿ ಶೇ.80 ಖಾಲಿ ಹುದ್ದೆಗಳ ರದ್ದತಿ ಕ್ರಮ ವಹಿಸಲು ಕೋರಿರುತ್ತಾರೆ ಹಾಗೂ ದಿ:23-07-2013ರ ಪತ್ರದಲ್ಲಿ ಮಾತಂ, ಜೈತಂ ನಿರ್ದೇಶನಾಲಯದಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಈ ಹಿಂದೆ ಪ್ರಸ್ತಾಪಿಸಿರುವಂತೆ 68 ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ ಆದೇಶ ಮಾಡಲು ಕೋರಿರುತ್ತಾರೆ.

ಒಟ್ಟಾರೆ ಖಾಲಿಯಿರುವ ಹುದ್ದೆಗಳಲ್ಲಿ ಶೇ.80ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಸಂಬಂಧದಲ್ಲಿ 2000-2001ರ ಆಯವ್ಯಯ ಭಾಷಣದ ಅನ್ವಯ ಹಾಗೂ ದಿ:27.07.2004ರಂದು ಮಾಡಿದ ಅಧಿಕಾರಯುಕ್ತ ಸಭೆಯ ತೀರ್ಮಾನದ ಮೇರೆಗೆ ಮಾತಂ, ಜೈತಂ ನಿರ್ದೇಶನಾಲಯದಲ್ಲಿ ದಿ:01.04.2000ದಂದು ಖಾಲಿ ಇದ್ದ ಹುದ್ದೆಗಳಲ್ಲಿ ಶೇ.80ರಷ್ಟು ಅಂದರೆ 68 ಹುದ್ದೆಗಳನ್ನು ರದ್ದುಪಡಿಸುವ ಸಂಬಂಧದಲ್ಲಿ ಅಧಿಕಾರಯುಕ್ತ ಸಮಿತಿಯ ನಿರ್ಣಯಗಳನ್ನು ಅನುಷ್ಠಾನಗೊಳಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಡಿ 29 ಡಿಐಎಸ್ 2006, ಬೆಂಗಳೂರು, ದಿನಾಂಕ:30-07-2013.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ ಆಡಳಿತಾತ್ಮಕ ವ್ಯಾಪ್ತಿಯಲ್ಲಿ ಬರುವ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ದಿನಾಂಕ.01.04.2000 ದಂದು ಖಾಲಿಯಿದ್ದ ವಿವಿಧ ವೃಂದದ ಹುದ್ದೆಗಳಲ್ಲಿ ಶೇ.80 ರಷ್ಟು ಹುದ್ದೆಗಳನ್ನು ಈ ಕೆಳಗೆ ಸೂಚಿಸಿರುವಂತೆ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1. | ಸಿಸ್ಟಮ್ ಅನಾಲಿಸ್ಟ್ | 08 |
| 2. | ಸೀನಿಯರ್ ಪ್ರೋಗ್ರಾಮರ್ | 02 |
| 3. | ಜೂನಿಯರ್ ಪ್ರೋಗ್ರಾಮರ್ | 37 |
| 4. | ಜೂನಿಯರ್ ಕನ್ಸೋಲ್ ಆಪರೇಟರ್ / ಪ್ರೋಗ್ರಾಮಿಂಗ್ ಅಸಿಸ್ಟೆಂಟ್ / ಸೂಪರ್ ವೈಸರ್ | 03 |
| 5. | ಡಾಟಾ ಎಂಟ್ರಿ ಆಪರೇಟರ್ಸ್ | 14 |
| 6. | ವಿದ್ಯುತ್ ಚಾಲಕರು | 01 |
| 7. | ವಾಹನ ಚಾಲಕರು | 01 |
| 8. | ಶೀಘ್ರಲಿಪಿಗಾರರು | 01 |
| 9. | ದಲಾಯತ್ | 01 |
| | **ಒಟ್ಟು** | **68** |

ಈ ಆದೇಶವನ್ನು ಆರ್ಥಿಕ ಅ.ಟಿ.ಸಂಖ್ಯೆ.ಆಇ.231.ವೆಚ್ಚ-1/2008, ದಿನಾಂಕ.17.06.2008ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ.ರಾಮಕೃಷ್ಣಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾತಂ, ಜೈತಂ ಹಾಗೂ ವಿತಂ ಇಲಾಖೆ.

P.R. 928
SC - 300

## ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವಾಲಯ

**ವಿಷಯ** : ಬೆಂಗಳೂರು ಗ್ರಾಮಾಂತರ ಜಿಲ್ಲಾ ವಿಕಲಚೇತನರ ಪುನರ್ವಸತಿ ಕೇಂದ್ರವನ್ನು ಬ್ಯಾಪ್ಟಿಸ್ಟ್ ಆಸ್ಪತ್ರೆ, ಬೆಂಗಳೂರು ಸಂಸ್ಥೆ ಮುಖಾಂತರ ಅನುಷ್ಠಾನಗೊಳಿಸುವ ಬಗ್ಗೆ

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ : ಮಮಇ 173 ಪಿಎಚ್‌ಪಿ 2010, ದಿನಾಂಕ: 28/09/2011
2) ತಿದ್ದುಪಡಿ ಸಂಖ್ಯೆ ಮಮಇ 144 ಪಿಎಚ್‌ಪಿ 2010, ದಿನಾಂಕ: 17/07/2012
3) ನಿರ್ದೇಶಕರು, ವಿ.ಹಿ.ನಾ.ಸ. ಇಲಾಖೆ, ಇವರ ಪತ್ರ ಸಂಖ್ಯೆ ವಿಹಿನಾಸಿ/ಸಿ8/ಡಿಡಿಆರ್‌ಸಿ/ಬೆಂ.ಗ್ರಾ/2012-13/4897, 1005, ದಿನಾಂಕ: 25-05-2013 & 02-07-2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಾಜ್ಯದ ಮೈಸೂರು, ಗದಗ, ರಾಯಚೂರು ಮತ್ತು ಹಾವೇರಿ ಜಿಲ್ಲೆಗಳ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ.) ರಾಜ್ಯ ಅನುದಾನದಡಿ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ, ಈ ಯೋಜನೆಯ ಮಾರ್ಗಸೂಚಿಯನುಸಾರ ನಡೆಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರ (ಡಿ.ಡಿ.ಆರ್.ಸಿ) ಯೋಜನೆಯನ್ನು ಗದಗ, ರಾಯಚೂರು ಮತ್ತು ಹಾವೇರಿ ಜಿಲ್ಲೆಗಳಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ ಮುಖಾಂತರ ಅನುಷ್ಠಾನಗೊಳಿಸಲು ಮಂಜೂರಾತಿ ನೀಡಿದೆ.

ಮೇಲೆ ಓದಲಾದ (2)ರ ದಿನಾಂಕ: 12-05-2011ರ ಸರ್ಕಾರಿ ಆದೇಶ ಸಂಖ್ಯೆ: ಮಮಇ 144 ಪಿಎಚ್‌ಪಿ 2012ರಲ್ಲಿ ನಿಗದಿಪಡಿಸಿರುವ ಜಿಲ್ಲಾ ಪುನರ್ವಸತಿ ಕೇಂದ್ರಗಳ ಅನುಷ್ಠಾನಕ್ಕೆ ಸಂಬಂಧ ಹೊರಡಿಸಿರುವ ಮಾರ್ಗಸೂಚಿಗಳಲ್ಲಿ ಭಾರತೀಯ ರೆಡ್ ಕ್ರಾಸ್ ಸೊಸೈಟಿ ಅಥವಾ ಜಿಲ್ಲಾ ವ್ಯಾಪ್ತಿಯಲ್ಲಿ ವಿಕಲಚೇತನರ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ/ಉತ್ತಮ ಸೇವೆ ಸಲ್ಲಿಸುತ್ತಿರುವ/ಜಿಲ್ಲೆಯಲ್ಲಿ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುತ್ತಿರುವ ಆಸ್ಪತ್ರೆ ಸೌಕರ್ಯವನ್ನು ಹೊಂದಿರುವ ಆಸಕ್ತ ಸ್ವಯಂ ಸೇವಾ ಸಂಸ್ಥೆಗಳ ಅಥವಾ ಜಿಲ್ಲಾ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವೈದ್ಯಕೀಯ ಮಹಾ ವಿದ್ಯಾಲಯಗಳ ಮುಖಾಂತರ ಸದರಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು ನಡೆಸಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (3)ರ ಪತ್ರಗಳಲ್ಲಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರು "ಬೆಂಗಳೂರು ಬ್ಯಾಪ್ಟಿಸ್ಟ್ ಆಸ್ಪತ್ರೆ, ಬೆಂಗಳೂರು, ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಿಲ್ಲಾ ವಿಕಲಚೇತನರ ಪುನರ್ವಸತಿ ಕೇಂದ್ರ" ಯೋಜನೆಯನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿದ್ದು, ಇದಕ್ಕೆ 2012-13ನೇ ಸಾಲಿನಲ್ಲಿ ರಾಜ್ಯ ಅನುದಾನ ಬಿಡುಗಡೆ ಮಾಡುವಂತೆ, ಜಿಲ್ಲಾ ವಿಕಲಚೇತನರ ಕಲ್ಯಾಣಾಧಿಕಾರಿಗಳು, ಇವರು ಪ್ರಸ್ತಾವನೆ ಸಲ್ಲಿಸಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳು ಈ ಯೋಜನೆಗೆ ಶಿಫಾರಸ್ಸು ಮಾಡಿರುವುದಾಗಿ ತಿಳಿಸಿರುತ್ತಾರೆ.

ಮುಂದುವರೆಸುತ್ತಾ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ "ಜಿಲ್ಲಾ ವಿಕಲಚೇತನರ ಪುನರ್ವಸತಿ ಕೇಂದ್ರ"ವನ್ನು ಬೆಂಗಳೂರು ಬ್ಯಾಪ್ಟಿಸ್ಟ್ ಆಸ್ಪತ್ರೆ, ಬೆಂಗಳೂರು, ಸಂಸ್ಥೆಯ ಮುಖಾಂತರ ಅನುಷ್ಠಾನಗೊಳಿಸುವ ಯೋಜನೆಗೆ 2013-14ನೇ ಸಾಲಿನ ಆಗಸ್ಟ್ 2013 ರಿಂದ ಮಾರ್ಚ್ 2014ರ ವರೆಗೆ ಅಗತ್ಯವಿರುವ ಆವರ್ತಕ ಮತ್ತು ಅನಾವರ್ತಕ ವೆಚ್ಚ ರೂ. 22,11,200/-ಗಳಿಗೆ ಮಂಜೂರಾತಿ ನೀಡಿ ಇಲಾಖೆಗೆ ನಿಗದಿಪಡಿಸಿರುವ ಲೆಕ್ಕಶೀರ್ಷಿಕೆ 2235-02-101-0-99 ಯೋಜನೆ ಉಪಲೆಕ್ಕಶೀರ್ಷಿಕೆ 100 ಧನಸಹಾಯ ಮತ್ತು ಪರಿಹಾರ ಯೋಜನೆಯಡಿ ಜಿಲ್ಲಾ ಪುನರ್ವಸತಿ ಕೇಂದ್ರಗಳಿಗೆ ನಿಗದಿಪಡಿಸಿಕೊಳ್ಳಲಾದ ಆಯವ್ಯಯದಡಿ ಭರಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ. ಹಾಗೂ ಈ ಸಂಬಂಧ ಕ್ರಿಯಾ ಯೋಜನೆಯನ್ನು ನಮೂನೆಯಲ್ಲಿ ಸಿದ್ಧಪಡಿಸಿ ಅನುಬಂಧದಲ್ಲಿ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 101 ಪಿಎಚ್‌ಪಿ 2013, ಬೆಂಗಳೂರು, ದಿನಾಂಕ : 12ನೇ ಸೆಪ್ಟೆಂಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಜಿಲ್ಲಾ ವಿಕಲಚೇತನರ ಪುನರ್ವಸತಿ ಯೋಜನೆಯಡಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ವಿಕಲಚೇತನರ ಪುನರ್ವಸತಿ ಕೇಂದ್ರವನ್ನು ಬ್ಯಾಪ್ಟಿಸ್ಟ್ ಆಸ್ಪತ್ರೆ, ಬೆಂಗಳೂರು ಸಂಸ್ಥೆಯ ಮುಖಾಂತರ 2013-14ನೇ ಸಾಲಿನಿಂದ ರಾಜ್ಯ ಅನುದಾನದಡಿ ಪ್ರಾರಂಭಿಸಲು ಸರ್ಕಾರದ ಆದೇಶ ಸಂಖ್ಯೆ: ಮಮಇ 173 ಪಿಎಚ್‌ಪಿ 2010, ದಿನಾಂಕ: 28-09-2011ರಲ್ಲಿ ನಿಗದಿಪಡಿಸಲಾದ ಮಾರ್ಗಸೂಚಿಯನ್ವಯ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

ಈ ಕೇಂದ್ರದ ನಿರ್ವಹಣೆಗಾಗಿ 2013-14ನೇ ಸಾಲಿನ ಆಗಸ್ಟ್ 2013ರಿಂದ ಮಾರ್ಚ್ 2014ರವರೆಗೆ ಲೆಕ್ಕಶೀರ್ಷಿಕೆ 2235-02-101-0-99 ಯೋಜನೆ ಉಪಲೆಕ್ಕಶೀರ್ಷಿಕೆ 100 ಧನಸಹಾಯ ಮತ್ತು ಪರಿಹಾರ ಯೋಜನೆಯಡಿಯಲ್ಲಿ ಜಿಲ್ಲಾ ವಿಕಲಚೇತನರ ಪುನರ್ವಸತಿ ಕೇಂದ್ರಗಳಿಗೆ ನಿಗದಿಪಡಿಸಿಕೊಳ್ಳಲಾದ ಆಯವ್ಯಯದಡಿ ರೂ. 22,11,200/- (ಇಪ್ಪತ್ತೆರಡು ಲಕ್ಷ ಹನ್ನೊಂದು ಸಾವಿರದ ಇನ್ನೂರು ರೂಪಾಯಿಗಳು ಮಾತ್ರ)ಗಳ ಅನುದಾನವನ್ನು ಅನುಬಂಧದಲ್ಲಿ ತಿಳಿಸಿರುವ ವಿವರಗಳಿಗಾಗಿ ಮಂಜೂರು ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ-3)ರ ಟಿಪ್ಪಣಿ ಸಂಖ್ಯೆ : ಆಇ 310 ವೆಚ್ಚ-3/13, ದಿನಾಂಕ: 27-08-2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ : ಮಮಇ 101 ಪಿಎಚ್‌ಪಿ 2013, ಬೆಂಗಳೂರು, ದಿನಾಂಕ : 12ನೇ ಸೆಪ್ಟೆಂಬರ್, 2013ಕ್ಕೆ ಅನುಬಂಧ**

| ಕ್ರ.ಸಂ. | ವಿವರ | | ಮಾಸಿಕ ಗೌರವ ಧನ | ಆಗಸ್ಟ್ 2013ರಿಂದ ಮಾರ್ಚ್ 14ರ ಅವಧಿಯವರೆಗೆ ಬಿಡುಗಡೆ ಮಾಡಬೇಕಾದ ಅನುದಾನ |
|---|---|---|---|---|
| | **I-ಆವರ್ತಕ ವೆಚ್ಚಗಳು** | | | |
| 1 | ಸಮಾಜ ಸೇವಾ ಕಾರ್ಯಕರ್ತರು (ಯೂನಿಟ್ ಇನ್‌ಚಾರ್ಜ್) | 01 | 15000x8x1 | 120000 |
| 2 | ಕೃತಕಾಂಗ ಜೋಡಣೆ ಪಿ & ಒ ಅಭಿಯಂತರರು–3 | 01 | 15000x8x1 | 120000 |
| 3 | ಪ್ರಾಸ್ಥೊಟಿಸ್ಟ್ &ಆರ್ಥೊಟಿಸ್ಟ್ | 02 | 10000x8x2 | 160000 |
| 4 | ಲೆದರ್‌ವರ್ಕರ್/ಶೂ ಮೇಕರ್ | 01 | 5000x8x1 | 40000 |
| 5 | ಕ್ಲಿನಿಕಲ್ ಸೈಕಾಲಿಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ 1000ಗಳಂತೆ) | 01 | 12000x8x1 | 96000 |
| 6 | ಸ್ಪೀಚ್ ಥೆರಪಿಸ್ಟ್ & ಆಡಿಯಾಲಿಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ. 1000ಗಳಂತೆ) | 01 | 12000x8x1 | 96000 |
| 7 | ಫಿಸಿಯೋ/ಆಕ್ಯುಪೇಷನಲ್ ಥೆರಪಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ. 1000ಗಳಂತೆ) | 01 | 12000x8x1 | 96000 |
| 8 | ಮೊಬಿಲಿಟಿ ಇನ್ಸ್‌ಟ್ರಕ್ಟರ್ | 01 | 5000x8x1 | 40000 |
| 9 | ಸ್ಪೆಷಲ್ ಎಜುಕೇಟರ್ (ಹೆಚ್.ಐ., ವಿ.ಐ., ಎಂ.ಆರ್.) | 03 | 5000x8x3 | 120000 |
| 10 | ಇಯರ್ ಮೋಲ್ಡ್ ಟೆಕ್ನಿಷಿಯನ್ | 01 | 5000x1x1 | 40000 |
| 11 | ಕೀಲು ಮತ್ತು ಮೂಳೆ ತಜ್ಞರು (ವಾರಕ್ಕೆ 3 ದಿನಗಳು, ದಿನಕ್ಕೆ ರೂ. 675/– ರಂತೆ) | 01 | 8100x8x1 | 64800 |
| 12 | ಆಪ್ತಾಲ್ಮೋಲಜಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ. 675/–ರಂತೆ) | 01 | 8100x8x1 | 64800 |
| 13 | ಇ.ಎನ್.ಟಿ. ಸ್ಪೆಷಲಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ. 675/–ರಂತೆ) | 01 | 8100x8x1 | 64800 |
| 14 | ಸೈಕಿಯಾಟ್ರಿಸ್ಟ್ (ವಾರಕ್ಕೆ 3 ದಿನಗಳು, ದಿನಕ್ಕೆ ರೂ. 675/–ರಂತೆ) | 01 | 8100x8x1 | 64800 |
| 15 | ಅಕೌಂಟೆಂಟ್ ಕಂ ಕ್ಲರ್ಕ್ | 01 | 8000x8x1 | 64000 |
| 16 | ಸ್ಟೋರ್ ಕೀಪರ್ ಕಂ ಕ್ಲರ್ಕ್ | 01 | 6000x8x1 | 48000 |
| 17 | ಕಂಪ್ಯೂಟರ್ ಆಪರೇಟರ್ | 01 | 5000x8x1 | 40000 |
| 18 | ಕಛೇರಿ ಸೇವಕರು | 01 | 4000x8x1 | 32000 |
| 19 | ರಾತ್ರಿ ಕಾವಲುಗಾರರು | 01 | 4000x8x1 | 32000 |
| 20 | ಕಟ್ಟಡ ನಿರ್ವಹಣೆ | | 3000x8x1 | 24000 |
| 21 | ಪ್ರಯಾಣ ವೆಚ್ಚಗಳು | | 10000x8x1 | 80000 |
| 22 | ಕಛೇರಿ ವೆಚ್ಚಗಳು | | 4000x8x1 | 32000 |
| 23 | ಲೇಖನ ಸಾಮಗ್ರಿ/ಪೋಸ್ಟೇಜ್ | | 4000x8x1 | 32000 |
| 24 | ಇತರೆ ವೆಚ್ಚಗಳು | | 5000x8x1 | 40000 |
| | | | ಒಟ್ಟು ರೂ.**(I)** | 16,11,200/– |
| | **II-ಅನಾವರ್ತಕ ವೆಚ್ಚಗಳು** | | | |
| | ಮೆಷಿನರಿ ಮತ್ತು ಎಕ್ವಿಪ್‌ಮೆಂಟ್ಸ್ | | | 500000 |
| | ಕಂಪ್ಯೂಟರ್ ಮತ್ತು ಪರಿಕರಗಳು | | | 50000 |
| | ಪೀಠೋಪಕರಣಗಳು | | | 50000 |
| | | | ಒಟ್ಟು ರೂ.**(II)** | 6,00,000 |
| | ಒಟ್ಟು **(I) + (II)**ರೂ. | | | **22,11,200** |
| **(ರೂಪಾಯಿ ಇಪ್ಪತ್ತೆರಡು ಲಕ್ಷದ ಹನ್ನೊಂದು ಸಾವಿರದ ಎರಡುನೂರು ಮಾತ್ರ)** | | | | |

**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು
ಹಿರಿಯ ನಾಗರೀಕರ ಸಬಲೀಕರಣ ಇಲಾಖೆ

**P.R. 912**
**SC 500**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇಲ್ಲಿಗೆ ಮಂಜೂರಾದ ಕೆಲವೊಂದು ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ

**ಓದಲಾಗಿದೆ :** ಪತ್ರ ಸಂಖ್ಯೆ: ಸಂ:ಮಪ್ರಮಂ/ಸಿಬ್ಬಂದಿ/ಹುದ್ದೆ ರದ್ದು/2013-14/205

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರು ಮಂಡಳಿಯಲ್ಲಿ ಕೆಲಸದ ಒತ್ತಡವು ಹೆಚ್ಚಾಗಿರುವುದಿಲ್ಲವಾದುದರಿಂದ ಮಂಜೂರಾಗಿರುವ 22 ಖಾಯಂ ಹುದ್ದೆಗಳು ಮತ್ತು 08 ತಾತ್ಕಾಲಿಕ ಹುದ್ದೆಗಳಲ್ಲಿ ಕೆಲವೊಂದು ಹುದ್ದೆಗಳನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 26 ಮಪ್ರಮಂ 2013, ಬೆಂಗಳೂರು, ದಿನಾಂಕ : 31ನೇ ಆಗಸ್ಟ್, 2013.**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿನ ಈ ಕೆಳಕಂಡಂತೆ 5 ಖಾಯಂ ಹುದ್ದೆಗಳು ಮತ್ತು 3 ತಾತ್ಕಾಲಿಕ ಹುದ್ದೆಗಳು ಒಟ್ಟು 8 ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

| ಹುದ್ದೆಗಳ ಹೆಸರು | ಖಾಯಂ ಹುದ್ದೆಗಳು | ತಾತ್ಕಾಲಿಕ ಹುದ್ದೆಗಳು | ಒಟ್ಟು |
|---|---|---|---|
| ಸಹಾಯಕ ನಿಯಂತ್ರಕರು | – | 1 ಹುದ್ದೆ | 1 ಹುದ್ದೆ |
| ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ | – | 1 ಹುದ್ದೆ |
| ಶೀಘ್ರಲಿಪಿಗಾರರು | 1 ಹುದ್ದೆ | 1 ಹುದ್ದೆ | 2 ಹುದ್ದೆ |
| ಬೆರಳಚ್ಚುಗಾರರು | 2 ಹುದ್ದೆ | 1 ಹುದ್ದೆ | 3 ಹುದ್ದೆ |
| ವಾಹನ ಚಾಲಕರು | 1 ಹುದ್ದೆ | – | 1 ಹುದ್ದೆ |
| **ಒಟ್ಟು** | **5 ಹುದ್ದೆ** | **3 ಹುದ್ದೆ** | **8 ಹುದ್ದೆ** |

ಈ ಆದೇಶವನ್ನು ಹಿಂಬರಹ ಸಂಖ್ಯೆ: ಆಇ 323 ವೆಚ್ಚ-6/2013, ದಿನಾಂಕ: 24-08-2013ರಲ್ಲಿನ ಆರ್ಥಿಕ ಇಲಾಖೆಯ ಸಹಮತಿ ಮತ್ತು ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 1996, ದಿನಾಂಕ: 10-07-1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**P.R. 913**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಅನುದಾನವನ್ನು ಹೆಚ್ಚಿಸುವ ಬಗ್ಗೆ

**ಪ್ರಸ್ತಾವನೆ :**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯನ್ನು ಸರ್ಕಾರವು 2001-02ನೇ ಸಾಲಿನಲ್ಲಿ ಪ್ರಾರಂಭಿಸಿ ಎಲ್ಲಾ ವಿಧಾನಸಭಾ/ಪರಿಷತ್ ಕ್ಷೇತ್ರಗಳಿಗೆ ತಲಾ ರೂ. 25.00 ಲಕ್ಷಗಳಂತೆ ವಾರ್ಷಿಕ ಅನುದಾನ ಬಿಡುಗಡೆಗೊಳಿಸಲಾಗಿತ್ತು. ಸದರಿ ಅನುದಾನವನ್ನು 2005-06ನೇ ಸಾಲಿನಲ್ಲಿ ತಲಾ ರೂ. 50.00 ಲಕ್ಷಗಳಿಗೆ ಹೆಚ್ಚಿಸಿ ಬಿಡುಗಡೆಗೊಳಿಸಲಾಗಿತ್ತು. ಇದಾದ ನಂತರ 2005-06ರಿಂದ 2012-13ನೇ ಸಾಲಿನವರೆಗೆ ಅನುದಾನವನ್ನು ರೂ. 100.00 ಲಕ್ಷಗಳಿಗೆ ಹೆಚ್ಚಿಸಿ ಬಿಡುಗಡೆಗೊಳಿಸಲಾಗಿದೆ.

ಪ್ರಸ್ತುತ, ಸರ್ಕಾರವು ಈ ಅನುದಾನವನ್ನು 2013-14ನೇ ಸಾಲಿನಿಂದ ರೂ. 200.00 ಲಕ್ಷಗಳಿಗೆ ಹೆಚ್ಚಿಸಲು ಉದ್ದೇಶಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 81 ಯೋವಿವಿ 2013, ಬೆಂಗಳೂರು, ದಿನಾಂಕ : 18ನೇ ಸೆಪ್ಟೆಂಬರ್, 2013.**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನವನ್ನು ಪ್ರತಿ ವಿಧಾನಸಭಾ/ಪರಿಷತ್ ಕ್ಷೇತ್ರಗಳಿಗೆ 2013-14ನೇ ಸಾಲಿನಿಂದ ರೂ. 100-00 ಲಕ್ಷಗಳಿಂದ ರೂ. 200.00 ಲಕ್ಷಗಳಿಗೆ ಹೆಚ್ಚಿಸಿದೆ.

2013-14ನೇ ಸಾಲಿನಲ್ಲಿ ನಿಗದಿಪಡಿಸಿರುವ ಅನುದಾನಕ್ಕೆ ಮಾನ್ಯ ಶಾಸಕರುಗಳಿಂದ ಪ್ರಸ್ತಾವನೆಗಳನ್ನು ಪಡೆದು ಸಂಬಂಧಿಸಿದ ಜಿಲ್ಲಾಧಿಕಾರಿಗಳು ನಿಯಮಾನುಸಾರ ಪರಿಶೀಲಿಸಿ ಅಕ್ಟೋಬರ್ 2013ರ ಅಂತ್ಯದೊಳಗೆ ಕ್ರಿಯಾ ಯೋಜನೆಗೆ ಅನುಮೋದನೆ ನೀಡತಕ್ಕದ್ದು.

ಈ ಆದೇಶವನ್ನು ಹಿಂಬರಹ ಸಂಖ್ಯೆ: ಆಇ 344 ವೆಚ್ಚ-6/2013, ದಿನಾಂಕ: 10-09-2013ರಲ್ಲಿನ ಆರ್ಥಿಕ ಇಲಾಖೆ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಉಮಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

**P.R. 914**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಡಾ॥ ಭಾರತಿ ಹಿರೇಮಠ್, ಜಿಲ್ಲಾ ಆಯುಷ್ ಅಧಿಕಾರಿ (ವೈದ್ಯ ದರ್ಜೆ-1) ಇವರ ಜಾತಿ ಪ್ರಮಾಣ ಪತ್ರದ ವಿಚಾರಣೆ ಬಗ್ಗೆ

**ಓದಲಾಗಿದೆ :**
1. ಸಮಾಜ ಕಲ್ಯಾಣ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಕಇ 116, ಎಸ್.ಎ.ಡಿ. 2013, ದಿನಾಂಕ: 22-05-2013
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 449 ಪಿಐಎಂ 2013, ದಿನಾಂಕ: 24-06-2013
3. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 5127/2013ರ ಬಗ್ಗೆ ದಿನಾಂಕ: 22-08-2013ರಂದು ನೀಡಿದ ಮಧ್ಯಂತರ ಆದೇಶ

**ಪ್ರಸ್ತಾವನೆ :**

ಸಮಾಜ ಕಲ್ಯಾಣ ಇಲಾಖೆಯು ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಡಾ॥ ಭಾರತಿ ಹಿರೇಮಠ್, ವೈದ್ಯರು ಇವರು ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದು ಸರ್ಕಾರಿ ಸೇವೆಗೆ ನೇಮಕಾತಿ ಹೊಂದಿದ್ದು, ಸದರಿಯವರು ಪಡೆದಿರುವ ಸುಳ್ಳು ಜಾತಿ ಪ್ರಮಾಣ ಪತ್ರವನ್ನು ತಹಶೀಲ್ದಾರರು ಈಗಾಗಲೇ ರದ್ದುಪಡಿಸಿರುವುದರಿಂದ ಹಾಗೂ ತಹಶೀಲ್ದಾರರ ಆದೇಶವನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 3003/2009, ದಿನಾಂಕ: 27-03-2013ರ ಆದೇಶದಲ್ಲಿ ಎತ್ತಿಹಿಡಿದಿರುವುದರಿಂದ ಡಾ॥ ಭಾರತಿ ಹಿರೇಮಠ್ ಇವರ ನೇಮಕಾತಿಯು ಕಾನೂನು ಬಾಹಿರವಾಗಿರುವುದರಿಂದ ಇವರನ್ನು ಸೇವೆಯಿಂದ ವಜಾಗೊಳಿಸುವಂತೆ ಕೋರಿತ್ತು.

ಡಾ॥ ಭಾರತಿ ಹಿರೇಮಠ್, ಇವರು ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿ ಪರಿಶಿಷ್ಟ ಜಾತಿಗೆ ಮೀಸಲಾಗಿದ್ದ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವೈದ್ಯರು ದರ್ಜೆ-3 ಹುದ್ದೆಗೆ ನೇಮಕಾತಿಗೊಂಡಿರುವುದು ಸಾಬೀತಾಗಿರುವುದರಿಂದ ಮೇಲೆ ಓದಲಾದ (1)ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಉಲ್ಲೇಖಿಸಿರುವ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪಿನನ್ವಯ ಸರ್ಕಾರವು ಪರಿಶೀಲಿಸಿ ಡಾ॥ ಭಾರತಿ ಹಿರೇಮಠ್, ಹಿರಿಯ ವೈದ್ಯಾಧಿಕಾರಿ, (ಹೋಮಿಯೋಪತಿ) ಆಯುಷ್ ಇಲಾಖೆ ಇವರನ್ನು ಸೇವೆಯಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂದು ತೀರ್ಮಾನಿಸಿ, ಮೇಲೆ ಓದಲಾದ ಕ್ರ.ಸಂ. (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಲಾಗಿದೆ.

ಸದರಿ ಆದೇಶದ ವಿರುದ್ಧ ಡಾ॥ ಭಾರತಿ ಹಿರೇಮಠ್ ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಸಲ್ಲಿಸಿರುವ ಅರ್ಜಿ ಸಂಖ್ಯೆ: 5127/2013ರಲ್ಲಿ ಆಡಳಿತ ನ್ಯಾಯಮಂಡಳಿಯ ದಿನಾಂಕ: 22-08-2013ರಂದು ನೀಡಿರುವ ಮಧ್ಯಂತರ ಆದೇಶದಲ್ಲಿ ಡಾ॥ ಭಾರತಿ ಹಿರೇಮಠ್ ಇವರನ್ನು ಸೇವೆಯಿಂದ ವಜಾಗೊಳಿಸಿರುವ ದಿನಾಂಕ: 24-06-2013ರ ಆದೇಶಕ್ಕೆ ತಡೆಯಾಜ್ಞೆ ನೀಡಿರುವುದರಿಂದ, ನ್ಯಾಯಮಂಡಳಿಯ ಆದೇಶವನ್ನು ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 449 ಪಿಐಎಂ 2012, ಬೆಂಗಳೂರು, ದಿನಾಂಕ : 10ನೇ ಸೆಪ್ಟೆಂಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರವಾದ ಸರ್ಕಾರವು ಡಾ॥ ಭಾರತಿ ಹಿರೇಮಠ್, ಹಿರಿಯ ವೈದ್ಯಾಧಿಕಾರಿ, ಪ್ರಸ್ತುತ ಜಿಲ್ಲಾ ಆಯುಷ್ ವೈದ್ಯಾಧಿಕಾರಿ, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ ಸರ್ಕಾರಿ ಆದೇಶ ಸಂಖ್ಯೆ: ಆಕುಕ 449 ಪಿಐಎಂ 2012, ದಿನಾಂಕ: 24-06-2013ನ್ನು, ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 5127/2013ರಲ್ಲಿ ದಿನಾಂಕ: 22-08-2013ರಂದು ನೀಡಿದ ಮಧ್ಯಂತರ ಆದೇಶದಲ್ಲಿ 6 ತಿಂಗಳವರೆಗೆ ಅಥವಾ ಅರ್ಜಿ ಇತ್ಯರ್ಥವಾಗುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಡೆಯಾಜ್ಞೆ ನೀಡಿರುವುದರಿಂದ, ದಿನಾಂಕ 24-06-2013ರ ಆದೇಶವನ್ನು ತಡೆಹಿಡಿಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎನ್. ಹರಿಣಿಯಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**P.R. 917**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ** : ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ಪಟ್ಟಣದಲ್ಲಿ ನ್ಯಾಯಾಲಯ ಸಂಕೀರ್ಣ ನಿರ್ಮಾಣ ಕಾಮಗಾರಿಯ ಅಂದಾಜು ಮೊತ್ತ ರೂ. 12.00 ಕೋಟಿ (ರೂಪಾಯಿ ಹನ್ನೆರಡು ಕೋಟಿಗಳು ಮಾತ್ರ)ಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಕ(ದ), ಬೆಂಗಳೂರು, ಇವರ ಪತ್ರ ಸಂ.ಮುಅ/ಸಂಕದ/ಸಇಂ-2:2012-13, ದಿನಾಂಕ: 04-01-2013

**ಪ್ರಸ್ತಾವನೆ :**

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ನ್ಯಾಯಾಲಯ ಸಂಕೀರ್ಣ ನಿರ್ಮಾಣ ಕಾಮಗಾರಿಯ ಅಂದಾಜು ರೂ. 12.00 ಕೋಟಿಗಳ ಮೊತ್ತಕ್ಕೆ 2012-13ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್-ಇ ನಲ್ಲಿ ಲೆಕ್ಕ ಶೀರ್ಷಿಕೆ: 4059 ಯೋಜನೆ ಅಡಿಯಲ್ಲಿ ಅನುದಾನ ರೂ. 3.60 ಕೋಟಿಗಳೊಂದಿಗೆ ಸೇರ್ಪಡೆಯಾಗಿರುತ್ತದೆ. ಸದರಿ ಕಾಮಗಾರಿಯ ಅಂದಾಜು ಪಟ್ಟಿಯಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲು ಅವಕಾಶ ಮಾಡಿಕೊಳ್ಳಲಾಗಿದೆ.

| ಕ್ರ.ಸಂ. | ವಿವರ | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಕೋರ್ಟ್ ಕಾಂಪ್ಲೆಕ್ಸ್ ಕಟ್ಟಡ ನಿರ್ಮಾಣ | 994.77 |
| 2 | ಅಪ್ರೋಚ್ ರಸ್ತೆ | 10.26 |
| 3 | ಬೋರ್‌ವೆಲ್ & ಪಂಪ್ | 2.49 |
| 4 | ನೀರು ಸರಬರಾಜು ಹಾಗೂ ನೈರ್ಮಲೀಕರಣ | 15.15 |
| 5 | ವಿದ್ಯುದೀಕರಣ | 4.23 |
| 6 | ಆರ್.ಸಿ.ಸಿ. ಡ್ರೇನ್ | 16.75 |

2. ಸದರಿ ಕಾಮಗಾರಿಯ ಅಂದಾಜು ಮೊತ್ತ ರೂ. 12.00 ಕೋಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

3. ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 7 ಬಿಜೆಪಿ 2013, ಬೆಂಗಳೂರು, ದಿನಾಂಕ : 04ನೇ ಜುಲೈ, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ನ್ಯಾಯಾಲಯ ಸಂಕೀರ್ಣ ನಿರ್ಮಾಣ ಕಾಮಗಾರಿಗೆ ಲೆಕ್ಕಶೀರ್ಷಿಕೆ: 4059 ಯೋಜನೆ ಅಡಿಯಲ್ಲಿ ಅಂದಾಜು ಪಟ್ಟಿಯ ಮೊತ್ತ ರೂ. 12.00 ಕೋಟಿ (ರೂಪಾಯಿ ಹನ್ನೆರಡು ಕೋಟಿಗಳು ಮಾತ್ರ) ಗಳ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಂ. ವೀರಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು)

**P.R. 918**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ** : ಹೊಸ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಮಹಾನಗರ ಪಾಲಿಕೆಗಳಲ್ಲಿನ ಸಹಾಯಕ ಕಾರ್ಯಪಾಲಕ ಅಭಿಯಂತರರುಗಳಿಗೆ ಕಾರ್ಯಪಾಲಕ ಅಭಿಯಂತರರ ಹುದ್ದೆಗಳಿಗೆ ಮುಂಬಡ್ತಿ ನೀಡುವ ಬಗ್ಗೆ **ಇಲಾಖಾ ಪದೋನ್ನತಿ ಸಮಿತಿಯನ್ನು** ರಚಿಸುವ ಕುರಿತು

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:5:ಎಸ್‌ಆರ್‌ಸಿ:84, ದಿನಾಂಕ: 09-10-1985
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:18:ಸೆನೆನಿ:2011, ದಿನಾಂಕ: 29-08-2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ, ಸರ್ಕಾರಿ ನೌಕರರಿಗೆ ಜೇಷ್ಠತೆ/ಅರ್ಹತೆಯನ್ನು ಆಧರಿಸಿ ಉನ್ನತ ಹುದ್ದೆಗಳಿಗೆ ಪದೋನ್ನತಿ ನೀಡಲು ಇಲಾಖಾ ಪದೋನ್ನತಿ ಸಮಿತಿಯನ್ನು ರಚಿಸಿ ಮಾರ್ಗಸೂಚಿಗಳನ್ನು ಸೂಚಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ, ಸರ್ಕಾರಿ ನೌಕರರ ಜೇಷ್ಠತೆ ಹಾಗೂ ಅರ್ಹತೆಯ ಆಧಾರದ ಮೇಲೆ ರಾಜ್ಯದ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ಪದೋನ್ನತಿಯನ್ನು ಪರಿಗಣಿಸುವ ಉದ್ದೇಶಕ್ಕಾಗಿ ರಚಿಸಲಾದ ಇಲಾಖಾ ಪದೋನ್ನತಿ ಸಮಿತಿಗಳಲ್ಲಿ ಅದೇ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡಕ್ಕೆ ಸೇರಿದ ಒಬ್ಬ ಅಧಿಕಾರಿಯನ್ನು ಯಾವ ಹುದ್ದೆಗೆ ಪದೋನ್ನತಿಯನ್ನು ಪರಿಗಣಿಸಲಾಗುತ್ತಿದೆಯೋ ಆ ಹುದ್ದೆಗೆ ಸಮಾನವಾದ ಹುದ್ದೆಯನ್ನು ಅಥವಾ ಆ ಹುದ್ದೆಗಿಂತ ಮೇಲ್ಪಟ್ಟ ಹುದ್ದೆಯನ್ನು ಧಾರಣ ಮಾಡಿರುವಂತಹ ಒಬ್ಬ ಅಧಿಕಾರಿಯನ್ನು ನೇಮಕ ಮಾಡುವಂತೆ ಸೂಚಿಸಲಾಗಿದೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 61 ಎಂಎನ್‌ಇ 2013, ಬೆಂಗಳೂರು, ದಿನಾಂಕ : 7ನೇ ಸೆಪ್ಟೆಂಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ನಗರಾಭಿವೃದ್ಧಿ ಇಲಾಖೆಯ ಗ್ರೂಪ್ 'ಎ' ವೃಂದದ ಇಂಜಿನಿಯರ್‌ಗಳಿಗೆ ಸಂಬಂಧಿಸಿದಂತೆ ಪದೋನ್ನತಿ ನೀಡಲು ಈ ಕೆಳಕಂಡಂತೆ ಇಲಾಖಾ ಪದೋನ್ನತಿ ಸಮಿತಿಯನ್ನು ರಚಿಸಲಾಗಿದೆ.

**ಸಮಿತಿ**

**ಸಹಾಯಕ ಕಾರ್ಯಪಾಲಕ ಅಭಿಯಂತರರ ವೃಂದದಿಂದ ಕಾರ್ಯಪಾಲಕ ಅಭಿಯಂತರರ ವೃಂದಕ್ಕೆ ಮತ್ತು ಕಾರ್ಯಪಾಲಕ ಅಭಿಯಂತರರ ವೃಂದದಿಂದ ಅಧೀಕ್ಷಕ ಅಭಿಯಂತರರ ವೃಂದದ ಪದೋನ್ನತಿ ಅರ್ಹತೆಯನ್ನು ಪರಿಶೀಲಿಸಲು**

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | ಅಧ್ಯಕ್ಷರು |
| 2 | ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ | ಸದಸ್ಯರು |
| 3 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಪ್ರತಿನಿಧಿ | ಸದಸ್ಯರು |

| | | |
|---|---|---|
| 4 | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಅಧೀಕ್ಷಕ ವೃಂದದ ಓರ್ವ ಇಂಜಿನಿಯರ್ ಪೌರಾಡಳಿತ ನಿರ್ದೇಶನಾಲಯ | ಸದಸ್ಯರು |
| 5 | ಸರ್ಕಾರದ ಅಪರ/ಜಂಟಿ/ಉಪ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ (ಮಹಾನಗರ ಪಾಲಿಕೆ–2) | ಸದಸ್ಯ–ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ವರದರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಮಹಾನಗರಪಾಲಿಕೆ–2) ನಗರಾಭಿವೃದ್ಧಿ ಇಲಾಖೆ

PR 920
SC 50

## ಒಳಾಡಳಿತ ಸಚಿವಾಲಯ

**ವಿಷಯ** : ಪೌರರಕ್ಷಣಾ ಸ್ವಯಂ ಸೇವಕರ ಕರ್ತವ್ಯ/ತರಬೇತಿ ಭತ್ಯೆಯ ದರವನ್ನು ಹೆಚ್ಚಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಒಇ 111 ಕಗೃಸೇ 2011, ದಿನಾಂಕ: 29–10–2011
2. ಸರ್ಕಾರದ ಆದೇಶ ಸಂಖ್ಯೆ: ಒಇ 01 ಕಗೃಸೇ 2013, ದಿನಾಂಕ: 30–04–2013
3. ಪೊಲೀಸ್ ಮಹಾನಿರ್ದೇಶಕರು ಹಾಗೂ ಮಹಾಸಮಾದೇಷ್ಟರು, ಗೃಹರಕ್ಷಕ ದಳ ಹಾಗೂ ಪೌರರಕ್ಷಣಾ ಇಲಾಖೆ ಇವರ ಪತ್ರ ಸಂಖ್ಯೆ: ಸಿಡಿ/06/ಡಿಸಿಡಿ/2013–14, ದಿನಾಂಕ: 21–05–2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಪೌರ ರಕ್ಷಣಾ ಸ್ವಯಂ ಸೇವಕರಿಗೆ ನೀಡಲಾಗುತ್ತಿರುವ ಕರ್ತವ್ಯ ಭತ್ಯೆ/ತರಬೇತಿ ಭತ್ಯೆಯ ದರಗಳನ್ನು ರೂ. 70/– ರಿಂದ 150/– ಗಳಿಗೆ ಹೆಚ್ಚಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ (2)ರ ಆದೇಶದಲ್ಲಿ ಗೃಹರಕ್ಷಕರ ಸ್ವಯಂ ಸೇವಕರ ಕರ್ತವ್ಯ ಭತ್ಯೆಯನ್ನು ಬೆಂಗಳೂರು ನಗರದಲ್ಲಿ ರೂ. 200/– ರಿಂದ ರೂ. 300ಕ್ಕೆ ಹಾಗೂ ಇತರೆ ಸ್ಥಳಗಳಲ್ಲಿ ರೂ. 175/– ರಿಂದ 250/–ಕ್ಕೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಆರಕ್ಷಕ ಮಹಾ ನಿರ್ದೇಶಕರು, ಗೃಹರಕ್ಷಕ ದಳದ ಮಹಾಸಮಾದೇಷ್ಟರು ಮತ್ತು ನಿರ್ದೇಶಕರು, ಪೌರರಕ್ಷಣಾ ಇಲಾಖೆ ಇವರು ಇತ್ತೀಚೆಗಷ್ಟೆ ಗೃಹರಕ್ಷಕರ ಕರ್ತವ್ಯ/ತರಬೇತಿ ಭತ್ಯೆಯನ್ನು ಹೆಚ್ಚಿಸಿರುವ ಹಿನ್ನಲೆಯಲ್ಲಿ ಪೌರರಕ್ಷಣಾ ಸ್ವಯಂ ಸೇವಕರ ಕರ್ತವ್ಯ/ತರಬೇತಿ ಭತ್ಯೆಯ ದರವನ್ನು ಸಹ ಹೆಚ್ಚಿಸಬೇಕಾಗಿರುತ್ತದೆ. ಈ ಎರಡು ಸಂಸ್ಥೆಗಳಲ್ಲಿನ ಸದಸ್ಯರುಗಳು ಸ್ವಯಂ ಸೇವಕರಾಗಿದ್ದು, ಸಮಾಜದ ಒಳಿತಿಗಾಗಿ ಒಂದೇ ಬಗೆಯ ಕರ್ತವ್ಯಗಳನ್ನು ನಿರ್ವಹಿಸುತ್ತಿರುವುದರಿಂದ ಅವರುಗಳಿಗೆ ಪಾವತಿಸಲಾಗುವ ಕರ್ತವ್ಯ/ತರಬೇತಿ ಭತ್ಯೆಯ ದರದಲ್ಲಿ ಯಾವುದೇ ತಾರತಮ್ಯವಿಲ್ಲದೆ ಸಮಾನವಾಗಿರುವುದು ಅತ್ಯಾವಶ್ಯಕವಾಗಿದೆ. ಭತ್ಯೆಯ ದರವನ್ನು ಸಮಾನಗೊಳಿಸುವುದರಿಂದ ಈ ಎರಡು ಸಂಸ್ಥೆಗಳ ಸದಸ್ಯರುಗಳು ಬೇದಭಾವವಿಲ್ಲದೆ ಸಮುದಾಯದ ಸೇವೆಯಲ್ಲಿ ಹೆಚ್ಚಿನ ಉತ್ಸಾಹದಿಂದ ಕರ್ತವ್ಯಗಳನ್ನು ನಿರ್ವಹಿಸಲು ಸಾಧ್ಯವಾಗುತ್ತದೆ ಎಂದು ತಿಳಿಸಿ ಪೌರರಕ್ಷಣಾ ಸ್ವಯಂ ಸೇವಕರಿಗೆ ನೀಡಲಾಗುತ್ತಿರುವ ಕರ್ತವ್ಯ/ತರಬೇತಿ ಭತ್ಯೆಯ ದರವನ್ನು ಸಹ ಬೆಂಗಳೂರು ನಗರದಲ್ಲಿ ದಿನವೊಂದಕ್ಕೆ ರೂ. 300/–ಕ್ಕೆ ಇತರೆ ಸ್ಥಳಗಳಲ್ಲಿ ದಿನವೊಂದಕ್ಕೆ ರೂ. 250/– ಹೆಚ್ಚಿಸುವಂತೆ ಕೋರಿದ್ದು, ಪ್ರಸ್ತಾವಿತ ಪರಿಷ್ಕರಣೆಯಿಂದಾಗಿ ವಾರ್ಷಿಕ ರೂ. 21.00 ಲಕ್ಷಗಳ ಹೆಚ್ಚುವರಿ ವೆಚ್ಚ ಉಂಟಾಗುತ್ತದೆ. ಈ ವೆಚ್ಚವನ್ನು 2070–ಇತರೆ ಆಡಳಿತ ಸೇವೆಗಳು–106–ಪೌರರಕ್ಷಣೆ –01 ಪೌರರಕ್ಷಣಾ ನಿರ್ದೇಶನಾಲಯ – 015 – ಪೂರಕ ವೆಚ್ಚಗಳು ಲೆಕ್ಕಶೀರ್ಷಿಕೆ ಅಡಿಯಲ್ಲಿ ಭರಿಸಬೇಕಾಗುತ್ತದೆ. ಈ ಲೆಕ್ಕಶೀರ್ಷಿಕೆ ಅಡಿಗೆ ಪ್ರಸಕ್ತ ಸಾಲಿನಲ್ಲಿ ರೂ. 24.68 ಲಕ್ಷಗಳ ಅನುದಾನ ಹಂಚಿಕೆಯಾಗಿರುತ್ತದೆ. ಪ್ರಸ್ತಾವಿತ 21.00 ಲಕ್ಷಗಳ ಹೆಚ್ಚುವರಿ ವೆಚ್ಚವನ್ನು ಸದರಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಲಭ್ಯವಾಗುವ ಮೊತ್ತ ಹಾಗೂ ಉಳಿದ ಕೊರತೆಯ ಮೊತ್ತವನ್ನು ಇತರೆ ಉಪ ಲೆಕ್ಕಶೀರ್ಷಿಕೆಗಳಿಂದ ಧನಪುರ್ನವಿನಿಯೋಗ ಮಾಡಿಕೊಂಡು ಭರಿಸಲಾಗುವುದು ಎಂದು ತಿಳಿಸಿ ಸರ್ಕಾರದ ಮಂಜೂರಾತಿ ಆದೇಶವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 64 ಕಗೃಸೇ 2013, ಬೆಂಗಳೂರು, ದಿನಾಂಕ : 27ನೇ ಆಗಸ್ಟ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪೌರರಕ್ಷಣಾ ಸ್ವಯಂ ಸೇವಕರಿಗೆ ನೀಡಲಾಗುತ್ತಿರುವ ಕರ್ತವ್ಯ/ತರಬೇತಿ ಭತ್ಯೆಯ ದರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಬೆಂಗಳೂರು ನಗರದಲ್ಲಿ ದಿನವೊಂದಕ್ಕೆ ರೂ. 300/–ಕ್ಕೆ ಹಾಗೂ ಇತರೆ ಸ್ಥಳಗಳಿಗೆ ದಿನವೊಂದಕ್ಕೆ ರೂ. 250/–ಕ್ಕೆ ಹೆಚ್ಚಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2013–14ನೇ ಸಾಲಿನ ಲೆಕ್ಕಶೀರ್ಷಿಕೆ 2070–00–106–0–01–015 ಪೂರಕ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಲಭ್ಯವಾಗುವ ಮೊತ್ತ ಹಾಗೂ ಉಳಿದ ಕೊರತೆಯ ಮೊತ್ತವನ್ನು ಇತರೆ ಉಪ ಲೆಕ್ಕ ಶೀರ್ಷಿಕೆಗಳಿಂದ ಧನಪುನರ್ ವಿನಿಯೋಗ ಮಾಡಿಕೊಂಡು ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 243 ವೆಚ್ಚ–11/2013 ದಿನಾಂಕ: 26–07–2013ರಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಿ.ಎಸ್. ಜೋಗೋಜೆ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

PR 927

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59